# ಮುಂಜಾವು

ವಾರಪತ್ರಿಕೆ.

ಸಂಪಾದಕ: ನಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ - 19

2ನೇ ವರ್ಷ 20ನೇ ಸಂಚಿಕೆ ಕೊಪ್ಪ 13-1-1985 ಭಾನುವಾರ ಬೆಲೆ 40 ಪೈಸೆ

# ಹುಲಿರಾಯ ಪೇಟೆ ಬೀದಿಗೆ ಬಂದ!

**ಶೃಂಗೇರಿ : ಈ ತಾಲ್ಲೂಕಿನಲ್ಲೂ ನೆರೆಯ ತಾಲ್ಲೂಕುಗಳಲ್ಲೂ ಹಳ್ಳಿಗಳಲ್ಲಿ ಹುಲಿಗಳು ಊರಿಗೇ ಬಂದು ತಮಗೆ ಬೇಕಾದ್ದನ್ನು ಕೊಂಡು ಹೋಗುತ್ತಿರುವುದು ಹಳೆಯ ಮಾತಾಯಿತು. ಅವುಗಳಲ್ಲೊಂದು ಮೊನ್ನೆ ಶೃಂಗೇರಿ ಪೇಟೆಗೇ ಬಂದು ರಾಜ್ಯಾದ್ಯಂತ ಪತ್ರಿಕೆಗಳಲ್ಲಿ ಬಿಸಿ ಬಿಸಿ ಸುದ್ದಿ ಮಾಡಿತು.**

ಜ. 4 ರ ಬೆಳಿಗ್ಗೆ ಪುರಭವನದೆದುರು ಮಲ್ಲಿಕಾರ್ಜುನ ಬೆಟ್ಟದ ಬುಡದಲ್ಲಿ ಅಡಗಿಕೊಂಡಿದ್ದ ಚಿರತೆಯೊಂದು ಸುತ್ತ ಮುತ್ತಲ ನರ ಗಮನ ಸೆಳೆಯಿತು. (ಚಿರತೆಗೂ ಹುಲಿಗೂ ವ್ಯತ್ಯಾಸ ಸರಿಯಾಗಿ ತಿಳಿಯದ ಜನರಿಂದಾಗಿ ಅದು ಹುಲಿ ಎಂದೇ ಹಬ್ಬಿ, ಪತ್ರಿಕೆಗಳಲ್ಲೂ ಹಾಗೇ ವರದಿಯಾಯಿತು.)

ಮಕ್ಕಳು ಕಲ್ಲು ಹೊಡೆದು ಅದರ ಮೂತಿಗೆ ಗಾಯಗೊಳಿಸಿದಾಗ ಅದು ಕೆರಳಿ ಹಿರಿಯಣ್ಣ ಎಂಬ ಯುವಕನ ಮೇಲೆರಗಿ ಗಾಯಗೊಳಿಸಿತು. ವಿಷಯ ತಿಳಿದ ಸಬ್ ಇನ್‌ಸ್ಪೆಕ್ಟರ್ ವರ್ಣೇಕರ್ ಅವರು ರಿವಾಲ್ವರ್‌ನಿಂದ ಅಲಂಕೃತರಾಗಿ ಬಂದು, ಜನರನ್ನೆಲ್ಲ (ಹೊಡೆದು?) ಚದುರಿಸಿ 'ಹುಲಿಯನ್ನು ನೋಡಲು ಹೋದಾಗ ಅದು ಅವರನ್ನೂ ಗಾಯಗೊಳಿಸಿ ಪರಾರಿಯಾಯಿತು.

ಊರಿನ ನಡುಮಧ್ಯದಲ್ಲೇ ಇರುವ ಈ ಬೆಟ್ಟಕ್ಕೆ ಅಂಟಿಕೊಂಡೇ ಸುತ್ತಲೂ ಮನೆಗಳಿದ್ದು, ಬೆಟ್ಟದ ಇನ್ನೊಂದು ಬದಿಯಿಂದ ಕೆಳಗಿಳಿದ ಅದು ಪ್ರೌಢಶಾಲೆ ಮುಖ್ಯೋಪಾಧ್ಯಾಯರ ಮನೆಯೊಳಗೆ ಹಿಂದಿನ ಬಾಗಿಲಿಂದ ಸೇರಿಕೊಂಡಿತು ಅವರು ಹೆದರಿ ಮುಂದಿನ ಬಾಗಿಲು ಹಾಕಿಕೊಂಡು ಓಟಕಿತ್ತರು.

ಚಿರತೆ ಮನೆಯೊಳಗಿರುವುದನ್ನು ಖಚಿತಪಡಿಸಿಕೊಂಡ ನೆರೆಯವರು ಹಿಂಬಾಗಿಲೂ ಹಾಕಿದರು. ವಿಷಯ ಊರೆಲ್ಲ ಹರಡಿ ಜನ ಜಾತ್ರೆ ಸೇರಿತು. ಅರಣ್ಯ ಇಲಾಖೆಯವರೂ ಬಂದು ಮನೆಯ ಸುತ್ತ ಪಹರೆ ನಿಂತರು. ಮೇಲಧಿಕಾರಿಗಳಿಗೂ ಸುದ್ದಿ ಹೋಗಿ, ಕೊಪ್ಪದಿಂದ ಡಿ. ಎಫ್. ಒ., ಎ. ಸಿ. ಎಫ್. ಎಲ್ಲ ಬಂದು, ಚಿರತೆಯನ್ನು ಹಿಡಿಯುವ ಪ್ರಯತ್ನಕ್ಕೆ ಮುಂದಾದರು. ಸರಿಯಾದ ಸಲಕರಣೆಗಳಿಲ್ಲದೆ 3 ಬಲೆಗಳನ್ನೇ ಜೋಡಿಸಿ ಒಂದು ಕಿಟಕಿಯನ್ನು ಕೊರೆದು ಅಲ್ಲಿ ಹರಿಜನರ ಕೈಯಿಂದ ಬಲೆ ಒಡ್ಡಿಸಿದರು.

ಇಷ್ಟಾಗುವಾಗ, ಮೇಷ್ಟರ ಮಂಚದ ಮೇಲೆ ಹಾಸಿಗೆಯಲ್ಲಿ ಕಂವುಚಿ ಮಲಗಿ ದಣಿವಾರಿಸಿಕೊಳ್ಳುತ್ತ, ಈ ಕ್ರೂರ ಮನುಷ್ಯ ಪ್ರಾಣಿಗಳ ಹಿಂಡಿನಿಂದ ತಪ್ಪಿಸಿಕೊಳ್ಳುವ ಉಪಾಯ ಯೋಚಿಸುತ್ತಿದ್ದ ಚಿರತೆ, ಆಗಾಗ ಕಿಟಕಿಯಲ್ಲಿ ದರ್ಶನಕೊಟ್ಟು ಅಬ್ಬರಿಸಿ, ಯಾರ್ಯಾರಿಗೆ ಎಷ್ಟೆಷ್ಟು ಭೀತಿ ಇದೆ ಎಂದು ಪರೀಕ್ಷಿಸಿ ಹೋಗುತ್ತಿತ್ತು. ಹಾಸಿಗೆಯೆಲ್ಲ ರಕ್ತ ಮಯವಾಗಿತ್ತು. ಈ 'ಪರೀಕ್ಷಾರ್ಥ'ದ ನೂಕುನುಗ್ಗಲಿನಲ್ಲಿ ನಾಲ್ಕೈದು ಜನ ಗಾಯಗೊಂಡರು. ಭಾರಿ ದೊಣ್ಣೆ ಹಿಡಿದುಕೊಂಡು ಬಂದಿದ್ದ ಒಬ್ಬರು ಅಲ್ಲೇ ಕುಸಿದೂ ಬಿದ್ದರು !

ಬಲೆ ಒಡ್ಡಿಯಾಗುವಾಗ ಹುಲಿ ಎಲ್ಲಿದೆ ಎಂದು ಮಾಡಿನ ಮೇಲಿನಿಂದ ನೋಡಲು ಹೋದ ರುದ್ರ ಎಂಬ ಕಾರ್ಮಿಕನಿಗೆ ಚಿರತೆ ಮಾಡಿನ ಬಳಿ ಬಂದು ಕಚ್ಚಿ ಗಾಯಗೊಳಿಸಿತು.

ರಾತ್ರಿ 7 ರ ಹೊತ್ತಿಗೆ ಸೆಕ್ಷನ್ 144 ಜಾರಿಗೊಳಿಸಿ ಜನರನ್ನು ಚದುರಿಸಿ, ಡಬ್ಬಿ ಬಾರಿಸುವ—ಪಟಾಕಿ ಸಿಡಿಸುವ ಮೂಲಕ ಚಿರತೆಯನ್ನು ಬಲೆಯ ದಿಕ್ಕಿನಲ್ಲಿ ಹೊರಕ್ಕಟ್ಟುವಂತೆ ಪ್ರಯತ್ನಿಸಲಾಯಿತು. ಆದರೆ ಈಗಾಗಲೇ ಉಪಾಯ ಯೋಚಿಸಿಟ್ಟಿದ್ದ ಚಿರತೆ ಮಾಡಿನ ರೀಪು ಮುರಿದು, ಹಂಚು ಕಿತ್ತು ಹೊರಗೆ ಹಾರಿ ಬೆಟ್ಟದ ಪೊದೆಗಳಲ್ಲಿ ಮರೆಯಾಯಿತು.

ಚಿರತೆಯ ನಿಗಾವನ್ನು ವಲಯ ಅರಣ್ಯಾಧಿಕಾರಿ ಲಕ್ಷ್ಮೀನಾರಾಯಣರಿಗೆ ವಹಿಸಿ ಮೇಲಧಿಕಾರಿಗಳು ಹಿಂದಿರುಗಿದರು.

ಬೆಳಗಿನ ಜಾವ ಬಹಳ ಹೊತ್ತಿನವರೆಗೂ ಬೆಟ್ಟದ ಬುಡದ ಮನೆಗಳ ಮೇಲೆ, ಅಲ್ಲಿ ಇಲ್ಲಿ ಓಡಾಡುತ್ತಿದ್ದ ಚಿರತೆ ಆನಂತರ ಯಾರ ಕಣ್ಣಿಗೂ ಕಾಣಿಸಲಿಲ್ಲ. ಅರಣ್ಯ ಇಲಾಖೆಯ ಡಿಪೋ ಮತ್ತು ಆಚೆ ತೋಟದ ಬಳಿ ಅದು ಹೋದ ಹೆಜ್ಜೆ ಗುರುತು ಸಿಕ್ಕಿದ್ದಾಗಿಯೂ ಜನ ಧೈರ್ಯವಾಗಿರಬಹುದೆಂದೂ ಮರುದಿನ ಸಾರಲಾಯಿತು.

## ವಿನಯ್ ಲೂಥ್ರ ಅವರನ್ನು ಕೇಳಿದಾಗ....

ಚಿರತೆ ಹಿಡಿಯುವ—ಓಡಿಸುವ ಪ್ರಯತ್ನಗಳ ಮೇಲ್ವಿಚಾರಣೆ ವಹಿಸಿದ್ದ ಕೊಪ್ಪ ವಿಭಾಗ ಅರಣ್ಯ ಸಂರಕ್ಷಣಾಧಿಕಾರಿ ವಿನಯ್ ಲೂಥ್ರ ಅವರನ್ನು 'ಮುಂಜಾವು' ಸಂದರ್ಶಿಸಿ, ಶೃಂಗೇರಿ ನಾಗರೀಕರು ಇಲಾಖೆಯ ಬಗ್ಗೆ ಮಾಡಿದ್ದ ಹಲವು ಆರೋಪಗಳನ್ನು ಅವರ ಗಮನಕ್ಕೆ ತಂದಾಗ....

'ಮುಂಜಾವು' : ಚಿರತೆ ಹೊಕ್ಕ ಮನೆ ಗಟ್ಟಿ ಇರಲಿಲ್ಲ. ನಿಮ್ಮಲ್ಲಿ ಅದನ್ನು ಹಿಡಿಯಲು ಸರಿಯಾದ ಸಲಕರಣೆಗಳಿರಲಿಲ್ಲ. ಅದು ಗಾಯಗೊಂಡಿತ್ತು ಬೇರೆ. ಹೀಗಿರುವಾಗ ಅದನ್ನು ಕೊಲ್ಲಲು ಜನ ಒತ್ತಾಯಿಸಿದರೂ ಕೊಲ್ಲದೆ, 2 ಮಂಗನ ಬಲೆ, 1 ಹಂದಿಯ ಬಲೆ ಒಟ್ಟು ಮಾಡಿ ಅದನ್ನು ಹಿಡಿಯುವ ಪ್ರಯತ್ನ ಮಾಡಿದ್ದು ಬೇಜವಾಬ್ದಾರಿಯಲ್ಲವೆ? ಚಿರತೆ ಅದರೊಳಗೆ ಬಂದಿದ್ದರೆ ಅದನ್ನು ಹಿಡಿಯಲು ನಿಮ್ಮಿಂದ ಸಾಧ್ಯವಿತ್ತೆ? ಅದು ಜನರ ಮೇಲೆ ನುಗ್ಗಿದ್ದರೆ ಗುಂಡು ಹಾರಿಸಲು ನಿಮ್ಮ ಕೋವಿಗಳು ಸಹ ಎಲ್ಲವೂ ಸರಿಯಿರಲಿಲ್ಲವಂತೆ. ನೀವು ಜನರ ಪ್ರಾಣದೊಂದಿಗೆ ಚೆಲ್ಲಾಟವಾಡಿದಿರಂತೆ ?

ವಿನಯ್ ಲೂಥ್ರ: ಚೆಲ್ಲಾಟವಾಡಿದ್ದು ಜನರೇ—ನೆರೆಯುವರ ಪ್ರಾಣದ ಜೊತೆ. ನಾವು ಎಷ್ಟು ಮನವಿ ಮಾಡಿದರೂ ಇಡೀ ದಿನ ಅವರು ಚದುರಲಿಲ್ಲ. ಕೊನೆಗೂ ಸೆಕ್ಷನ್ 144 ಜಾರಿ ಮಾಡಿ ಚದುರಿಸಬೇಕಾಯ್ತು. ಕುತೂಹಲಕ್ಕೆ ಒಮ್ಮೆ ನೋಡಿ, ಮತ್ತೆ ನಮ್ಮ ಕಾರ್ಯಾಚರಣೆಗೆ ಅವಕಾಶ ಕೊಡಬಹುದಿತ್ತಲ್ಲ. ನಾವು ಗುಂಡು ಹಾರಿಸುವ ಅಗತ್ಯ ಧುತ್ತನೆ ಬಂದಿದ್ದರೆ, ಈ ಜನರ ಹಿಂಡಿನಲ್ಲಿ ಹೇಗಾಗುತ್ತಿತ್ತು?

ನಾವು ಬಳಸಿದ್ದು ಮೂರೂ ಹಂದಿಯ ಬಲೆಗಳನ್ನೇ. ಕಾಡು ಹಂದಿಯ ಶಕ್ತಿಯೇನೂ ಕಮ್ಮಿಯಿರುವುದಿಲ್ಲವಷ್ಟೆ? ಅಲ್ಲದೆ ಚಿರತೆ ಅದರೊಳಗೆ ಪ್ರವೇಶಿಸಿ, ಬಲೆಯನ್ನು ಕಟ್ಟಿ ಬಿಟ್ಟರೆ ಅದಕ್ಕೆ ಕೈ ಕಾಲು ಚಲಿಸಲು ಅವಕಾಶವಿಲ್ಲ. ಆಗ ಅದರ ಶಕ್ತಿ ಎಷ್ಟಿದ್ದರೇನಂತೆ? ಇಷ್ಟಕ್ಕೂ ಈ ವಿಷಯದಲ್ಲಿ ನಾವು ಹೆಚ್ಚು ತಜ್ಞರೋ ಜನರೋ ?

ಅದೇನೂ ನರಭಕ್ಷಕವಾಗಿರಲಿಲ್ಲ. ಹಾಗಿರುವಾಗ, ಹಿಡಿಯುವ ಪ್ರಯತ್ನ ಸಾಧ್ಯವಿರುವಾಗ, ಅನಗತ್ಯವಾಗಿ ಅದನ್ಯಾಕೆ ಕೊಲ್ಲಬೇಕು? ಮತ್ತೆ, ಹಾಳದ ಕೋವಿ ಹಿಡಿದು ಹುಲಿ ಎದುರಿಸುವುದಕ್ಕೆ ಹೋಗಲು ಸಿಬ್ಬಂದಿಗೇನು ತಲೆ ಕೆಟ್ಟಿತ್ತು ಅಥವಾ ಜೀವ ಬೇಡಾಗಿತ್ತು ಎನ್ನುತ್ತಾರಾ?

'ಮುಂಜಾವು' : ಹುಲಿ ಇನ್ನೂ ಬೆಟ್ಟದ ಸರಹದ್ದಿನಲ್ಲೇ ಇದ್ದಾಗಲೂ ನೀವು ಹಿರಿಯ ಅಧಿಕಾರಿಗಳೆಲ್ಲ ರಾತ್ರಿ ಹೊರಟು ಹೋದಿರಂತೆ. ಜನರ ರಕ್ಷಣೆಯ ಬಗ್ಗೆ ಇಷ್ಟು ನಿಗಾ ಸಾಕೆ ?

ಲೂಥ್ರ: ಇನ್ನೇನು ರಕ್ಷಣೆ ಬೇಕಾಗಿತ್ತು? ಅಲ್ಲಿ ಪೂರ್ಣ ಜವಾಬ್ದಾರಿಯುಳ್ಳ ನಮ್ಮ ವಲಯ ಅರಣ್ಯಾಧಿಕಾರಿ ಇದ್ದಾರೆ. ನಾವೂ 10 ದಿನ ಕ್ಯಾಂಪ್ ಮಾಡಬೇಕಿತ್ತೆ?

'ಮುಂಜಾವು': ಆದರೆ ಅವರು ರಾತ್ರಿ ಕುಡಿದು 'ಟೈಟ್' ಆಗಿದ್ದರಂತೆ. 10 ಗಂಟೆಯ ಹೊತ್ತಿನಲ್ಲಿ ಚಿರತೆ ಇನ್ನೊಂದು ಕಡೆ ಕಾಣಿಸಿಕೊಂಡಾಗ ಜನ ಹೆದರಿ ಅವರ ಹತ್ತಿರ ರಕ್ಷಣೆ ಕೇಳಲು ಹೋದರೆ ಅವರು ಹೊರಗೆ ಬರುವ ಸ್ಥಿತಿಯಲ್ಲಿರಲಿಲ್ಲವಂತೆ ?

ಲೂಥ್ರ: ಈ ಬಗ್ಗೆ ಖಚಿತ ದೂರು ಬಂದರೆ ವಿಚಾರಣೆ ನಡೆಸುತ್ತೇನೆ.

'ಮುಂಜಾವು': ಚಿರತೆ ಹೊರಟು ಹೋಯಿತು ಎಂದು ನೀವು ಸಾರಿದ್ದೀರಂತೆ. ಆದರೆ ಅದು ಶನಿವಾರ, ಭಾನುವಾರ, ಸೋಮವಾರ ಕೂಡಾ ಬೆಟ್ಟದಲ್ಲೇ ಕಾಣಿಸಿಕೊಂಡಿದೆಯಂತಲ್ಲ?

ಲೂಥ್ರ: ನಾವು ಬಹಳ ದೂರ, ಕಾಡು ಹೊರಗೆ ಹೋಗಿ ಅದು ಹೋದ ಹೆಜ್ಜೆ ಗುರುತನ್ನು ಸ್ಪಷ್ಟವಾಗಿ ಕಂಡಿದ್ದೇನೆ. ಇವತ್ತು (ಜ. 9) ಕೂಡ ನಾನೇ ಬೆಟ್ಟದ ಮೇಲ್ಗಡೆ

(1 ನೇ ಕಾಲಂ ನೋಡಿ)

(ಕೊನೇ ಕಾಲಂನಿಂದ)

ಹೋಗಿ ಸುತ್ತಾಡಿದ್ದೇನೆ. ಜನರು ಹೇಳಿದಲ್ಲೆಲ್ಲ ಹೋಗಿ ನೋಡಿದ್ದೇನೆ. ಯಾರೂ ಕಂಡವರಿಲ್ಲ. ಅದರ ಸುಳಿವೂ ಇಲ್ಲ. ಆದರೂ ರಾತ್ರಿ ರೇಂಜರ್‌ಗೆ ಒಂದು ಸುತ್ತು ಗಸ್ತು ಹಾಕಲು ಹೇಳಿದ್ದೇನೆ. ಅಲ್ಲದೆ, ಯಾರಾದರೂ ಅದನ್ನು ಕಂಡರೆ ಅಥವಾ ಖಚಿತವಾದ ಅನುಮಾನ ಬಂದರೆ ಕೂಡಲೇ ರೇಂಜರ್‌ಗೆ ತಿಳಿಸಬೇಕು. ಅವರು ಮುಂದಿನ ಕ್ರಮ ತೆಗೆದುಕೊಳ್ಳುತ್ತಾರೆ.

'ಮುಂಜಾವು': ಶೃಂಗೇರಿಯ ಸುತ್ತಲೂ ಹೊಳೆ, ಗದ್ದೆಗಳು ಇವೆ. ದಟ್ಟ ಕಾಡು ಹತ್ತಿರ ಇಲ್ಲ. ಹಾಗಿದ್ದೂ ಊರೊಳಗಿರುವ ಬೆಟ್ಟದ ಮೇಲೆ ಚಿರತೆ ಹೇಗೆ ಬಂದಿರಬಹುದು? ಅದು ಹಾಗೆ ಬರಲು ಕಾರಣವೇನಿರಬಹುದು? ಚಿರತೆ ಹುಲಿಯಂಥ ಗಂಭೀರ ಪ್ರಾಣಿಯಲ್ಲ. ತೋಳನಂತೆ ಕೆಟ್ಟ ಸ್ವಭಾವದ್ದು. ಜನ ಅದಕ್ಕೆ ಹೊಡೆದು, ಹುಚ್ಚೆಬ್ಬಿಸಿದಾಗಲೂ ಅದು ಯಾರಿಗೂ ಪ್ರಾಣಾಪಾಯ ಮಾಡಲಿಲ್ಲ, ಏಕಿರಬಹುದು ?

ಬೆಟ್ಟದ ದೇವಸ್ಥಾನದಲ್ಲಿ ಸದ್ಯವೇ ನಡೆಯಲಿರುವ ಕುಂಭಾಭಿಷೇಕಕ್ಕೂ ಈ ಚಿರತೆಯ ಆಗಮನಕ್ಕೂ ದೈವೀ ಸಂಬಂಧ ಕಲ್ಪಿಸಿ ಪ್ರಚಾರ ಮಾಡುತ್ತಿದ್ದಾರಲ್ಲ?

ಲೂಥ್ರ: ಮೇಲು ನೋಟಕ್ಕೆ ಇದೊಂದು ರೀತಿ ವಿಸ್ಮಯಕರವಾಗಿ, ಸಾಮಾನ್ಯ ಜನರಿಗೆ ದೈವಿಕವಾಗಿ ಕಾಣಬಹುದು. ಆದರೆ ಅಂಥ ಪ್ರಚಾರ ಮೂರ್ಖತನದ್ದು. ಸುತ್ತಲ ಕಾಡು ನಾಶವಾಗಿ ಅವಕ್ಕೆ ನೆಲೆಯಿಲ್ಲ. ಜನರು ಪ್ರಾಣಿಗಳ ಬೇಟೆಯಾಡಿ ಅವಕ್ಕೆ ಹೊಟ್ಟೆಗೆ ಸುಲಭವಾಗಿ ಸಿಕ್ಕುವುದಿಲ್ಲ. ಹೀಗಾಗಿ ಅವು ಊರ ಬದಿಗೆ ಬರುವುದು ಅನಿವಾರ್ಯ. ಆಗ ಬಹಳ ರಿಸ್ಕ್ ತೆಗೆದುಕೊಳ್ಳಲೇ ಬೇಕಾಗುತ್ತದೆ.

ಹಾಗೆ ದಿಕ್ಕು ತಪ್ಪಿ ಬಂದು ಒಮ್ಮೆ ಮನುಷ್ಯರ ನಡುವೆ ಸಿಕ್ಕಿಬಿದ್ದ ಮೇಲೆ ಅದು ಪೂರ್ತಿ ಹೆದರಿ ಬಿಟ್ಟಿದೆ. ಅದಕ್ಕೆ ತನ್ನ ಜೀವ ಉಳಿಸಿಕೊಳ್ಳುವುದು ಮುಖ್ಯವಾಗಿತ್ತು, ಹಲ್ಲೆ ಮಾಡುವುದಲ್ಲ.

### ದೇಶದ ಸಾಮಾನ್ಯ ಜನರ ಜೀವನದಲ್ಲಿ

# ಚುನಾವಣಾ ಫಲಿತಾಂಶದ ಪ್ರಭಾವವೇನು?

ದೇಶದ ರಾಜಕಾರಣದಲ್ಲಿ, ಈಚಿನ ದಶಕಗಳಲ್ಲಿ ಕಂಡರಿಯದ ರೀತಿಯಲ್ಲಿ ವಿರೋಧ ಪಕ್ಷಗಳು ಮಣ್ಣು ಮುಕ್ಕಿವೆ. ಕಾಂಗ್ರೆಸ್-ಐ ಪ್ರಚಂಡ ಬಹುಮತ ಪಡೆದಿದೆ. ದಾಸ್ಯ ಮತ್ತು ಪಾಳೆಯಗಾರಿ ವ್ಯವಸ್ಥೆಯ ಚಿಹ್ನೆಯಾದ ವಂಶ ಪಾರಂಪರ್ಯ ಆಳ್ವಿಕೆಯ ವಿರುದ್ಧ ಏಳೆಂಟು ವರ್ಷಗಳ ಸತತ ವಿರೋಧದ ಬಳಿಕವೂ ರಾಜೀವ್ ಗಾಂಧಿಯೇ ತಮ್ಮ ತಾಯಿಯ ಉತ್ತರಾಧಿಕಾರಿಯಂತೆ ಪ್ರಧಾನ ಮಂತ್ರಿಯಾಗಿದ್ದಾರೆ. (ಅಥವಾ ಈ ಮೊಂಬರಾಟದ ರಾಜಕಾರಣದಲ್ಲಿ ಸ್ವತಂತ್ರ, ಸಮರ್ಥ ನಾಯಕರುಗಳು ಬೆಳೆಯಲು ಸಾಧ್ಯವಿಲ್ಲವೆಂಬುದಕ್ಕೆ ಇದು ದ್ಯೋತಕವೆ?) (ಈ ಎಲ್ಲ ಅದ್ದೂರಿ-ಆಡಂಬರದ ನಡುವೆ, ಪಂಜಾಬ್ ಮತ್ತು ಅಸ್ಸಾಂ ಜನರ ಸಮಸ್ಯೆಯನ್ನೂ ನಿವಾರಿಸಲಿಲ್ಲ, ಅವರಿಗೆ ತಮ್ಮ ಪ್ರತಿನಿಧಿಗಳನ್ನು ಲೋಕಸಭೆಗೆ ಕಳಿಸುವ ಅವಕಾಶವನ್ನೂ ಒದಗಿಸಲಾಗಲಿಲ್ಲ ಎಂಬ ಸತ್ಯ ಮುಚ್ಚಿ ಹೋಗಿದೆ.)

**ಆಗಬಾರದ್ದು ?**

'ವಿರೋಧ ಪಕ್ಷಗಳೆಲ್ಲ ಸೋತಿವೆ. ಲೋಕಸಭೆಯಲ್ಲಿ ಪ್ರಮುಖ ವಿರೋಧಿ ನಾಯಕರ್‍ಯಾರೂ ಇಲ್ಲ. ಹೀಗಾಗಿ ದೇಶದಲ್ಲಿ ಏನೋ ಆಗಬಾರದ್ದು ಆಗಿ ಹೋಯಿತು. ಮುಂದೆ ಜನರ ಜೀವನದ ಗತಿ ಏನು' ಎಂದು ಹಲವರು ಚಿಂತಾಕ್ರಾಂತರಾಗಿದ್ದಾರೆ. ಆದರೆ ದೇಶದ ಸಾಮಾನ್ಯ ಜನರ ಜೀವನದ ಮೇಲೆ ಈ ಫಲಿತಾಂಶದ ಪ್ರಭಾವವೇನು ಹಾಗೂ ವಿರೋಧ ಪಕ್ಷಗಳು ಹೆಚ್ಚು ಗೆದ್ದಿದ್ದರೆ ಏನು ವ್ಯತ್ಯಾಸವಿರುತ್ತಿತ್ತು ಎಂಬುದನ್ನು ಸ್ವಲ್ಪ ವಿವೇಚಿಸೋಣ.

**ಸರ್ಕಾರವೆಂದರೆ....**

ಜನ ಓಟು ಕೊಡುವಾಗ ರಾಷ್ಟ್ರೀಯ ನಾಯಕರ ಮೇಲೆ ವಿಶ್ವಾಸವಿಟ್ಟು ಓಟು ಕೊಟ್ಟರೂ ಜನರ ಪಾಲಿಗೆ ಸರ್ಕಾರವೆಂದರೆ ಸ್ಥಳೀಯ ರಾಜಕಾರಣಿಗಳು ಮತ್ತು ಅಧಿಕಾರಿಗಳು. ಈ ಪೈಕಿ ಅಧಿಕಾರಿಗಳ ದರ್ಪ, ಲಂಚಗುಳಿತನ ಮತ್ತು ಹೃದಯ ಹೀನತೆಗಳು ಸಾಮಾನ್ಯವಾಗಿ ಯಾವ ಪಕ್ಷದ ಸರ್ಕಾರವಿದ್ದರೂ ಹೆಚ್ಚು ವ್ಯತ್ಯಾಸವಾಗುವುದಿಲ್ಲ. ಕರ್ನಾಟಕದ ಜನತಾ ಸರ್ಕಾರದ ಆಳ್ವಿಕೆಯ ಈ ಎರಡು ವರ್ಷಗಳಲ್ಲಿ ಈ ಅನಿಷ್ಟಗಳು ಸ್ವಲ್ಪ ಕಡಿಮೆಯಾಗಿದ್ದವು ಎಂದು ಹೇಳುತ್ತಾರಾದರೂ ಸಾಮಾನ್ಯ ಜನರ ದಿನನಿತ್ಯದ ವ್ಯವಹಾರಗಳಲ್ಲಿ ಅವು ಹಬ್ಬಿರುವ ಪ್ರಮಾಣ ಗಣನೀಯವಾಗಿಯೇನೂ ತಗ್ಗಿಲ್ಲ.

ಆದ್ದರಿಂದ ಕಾಂಗ್ರೆಸ್(ಐ)ಗೆ ಬಹುಮತ ಹೆಚ್ಚು ಅಥವಾ ಕಮ್ಮಿಯಿರುವುದು ಅಧಿಕಾರಶಾಹಿಯ ಮನೋಭಾವದಲ್ಲಿ ಹೆಚ್ಚಿನ ಬದಲಾವಣೆಯನ್ನೇನೂ ಮಾಡಲಾರದು. ಆದರೂ ಎಷ್ಟೋ ಕಡೆ (ಕೊಪ್ಪ ತಾಲ್ಲೂಕಿನಲ್ಲೂ ಸಹ) ಕೆಲವು ಸರ್ಕಾರಿ ಕಚೇರಿಗಳಲ್ಲಿ ಕಾಂಗ್ರೆಸ್(ಐ)ನ ವಿಜಯದ ಬಗ್ಗೆ ಬಹಳ ಉತ್ಸಾಹದಿಂದ ಸಿಹಿ ಹಂಚಲಾಯಿತೆಂಬ ವರದಿಗಳೂ ಇವೆ.

**ಚುನಾವಣೆಯೇ ಗುರಿ**

ರಾಜಕಾರಣಿಗಳು ಮತ್ತು ಪುಢಾರಿಗಳ ವಿಷಯದಲ್ಲಿ ಹೇಳುವುದಾದರೆ, ಜನರ ಮೂಲಭೂತ ಸಮಸ್ಯೆಗಳನ್ನು ದೃಢ ನಿರ್ಧಾರದಿಂದ ಶಾಶ್ವತವಾಗಿ ಬಗೆಹರಿಸುವತ್ತ ಅಚಲವಾಗಿ ದುಡಿಯಬಲ್ಲ ಯಾವ ರಾಜಕೀಯ ಪಕ್ಷವೂ ಇಂದು ದೇಶದಲ್ಲಿ ಇಲ್ಲ. ಎಲ್ಲರ ಗಮನ-ಗುರಿಗಳೂ ಮುಂದಿನ ಚುನಾವಣೆಯ ಕಡೆ ಮಾತ್ರ. ಉದಾಹರಣೆಗೆ, ಯಾವುದೇ ಸರಕಾರಿ ಇಲಾಖೆಯಲ್ಲಿ ಲಂಚ ಒಡವರ ಪಾಲಿಗೆ ಇಂದು ಒಂದು ಮೂಲಭೂತ ಸಮಸ್ಯೆಯೇ ಆಗಿಬಿಟ್ಟಿದೆ. ರಾಜಕಾರಣಿ ಅಥವಾ ಪುಢಾರಿಗಳಿಗೆ ಅಧಿಕಾರವಿದೆ ಅಥವಾ ಪಕ್ಷದ ಸಂಘಟನೆಯಾದರೂ ಇದೆ. ಅವರೆಂದರೆ ನೌಕರರು-ಅಧಿಕಾರಿಗಳು ಸ್ವಲ್ಪ ಹುಷಾರಾಗಿರುತ್ತಾರೆ. ಆದರೆ ಯಾವನಾದರೂ ರಾಜಕೀಯ ವ್ಯಕ್ತಿ ಇವತ್ತು ಈ ಸರಕಾರಿ ಕಲ್ಲು ಕಂಬಗಳಿಗೆ- "ಯಾಕೆ ಲಂಚ ತೆಗೆದುಕೊಳ್ಳುತ್ತೀರಿ. ಲಂಚವಿಲ್ಲದೆ ಜನರ ಕೆಲಸ ಮಾಡಿಕೊಡಿ" ಎಂದು ಎದುರಿಗೆ ಹೇಳಬಲ್ಲನೆ? ಹೇಳಿ ಹಾಗೆ ಮಾಡಿಸಬಲ್ಲನೆ? "ಅಯ್ಯೋ, ಇವತ್ತು ಯಾರ್‍ರಿ ಲಂಚ ತಗಳ್ದೆ ಕೆಲಸ ಮಾಡ್ತಾರೆ. ಲಂಚ ತೇಕೆ ಯಾವ ಬ್ರಹ್ಮ ಬಂದ್ರೂ ಆಗುಲ್ಲ. ಏನೋ ಒಂದಷ್ಟು ಅತ್ಲಾಗೆ ಬಿಸಾಕಿ ನಿಮ್ಮ ಕೆಲಸ ಮಾಡಿಸಿಕೊಳ್ಳಿ...." ಎನ್ನುತ್ತಾರೆ. ತಾವು ಮಾಡುವುದೂ ಅದೇ, ಬೇರೆಯವರಿಗೆ ಹೇಳುವುದೂ ಅದೇ.

**ಊಟ, ಬಟ್ಟೆ, ಮನೆ . . .**

ಜನರ ಮೂಲಭೂತ ಸಮಸ್ಯೆಗಳೆಂದರೆ ಊಟ, ಬಟ್ಟೆ, ಮನೆ, ವಿದ್ಯಾಭ್ಯಾಸ, ಔಷಧೋಪಚಾರ, ದುಡಿವ ಶಕ್ತಿ ಕುಂದಿದ ನಂತರ ಪೋಷಣೆ ಇತ್ಯಾದಿ. ಈ ಎಲ್ಲವನ್ನೂ ಆಗತ್ಯಪ್ರಮಾಣದಲ್ಲಿ ಪಡೆಯಲು ಬೇಕಾಗುವಷ್ಟು ಆದಾಯ ತರಬಲ್ಲ ಉದ್ಯೋಗ ಅಥವಾ ಜಮೀನು ಜನರಿಗೆ ಬೇಕು.

ಆದರೆ ದೇಶದಲ್ಲಿರುವ ಭೂಮಿಯನ್ನೆಲ್ಲ ಈಗಾಗಲೇ ಕೆಲವೇ ಕೆಲವು ಜನ ತಮ್ಮದನ್ನಾಗಿ ಮಾಡಿಕೊಂಡಾಗಿದೆ. ಉಳಿದ ಸ್ವಲ್ಪವನ್ನೂ ತಮ್ಮ ತಮ್ಮಲ್ಲೇ ಒಳಗೆ ಹಾಕಿಕೊಳ್ಳುತ್ತಲೇ ಇದ್ದಾರೆ. ಜಮೀನು ಬೇಕಾದ ಎಲ್ಲರಿಗೂ ಜಮೀನು ಸಿಗಬೇಕಾದರೆ ಈಗ ಉಳಿದಿರುವ ಒಂದೇ ದಾರಿ-ಒಂದು ಗರಿಷ್ಠ ಆಗತ್ಯದ ಮಿತಿಗಿಂತ ಹೆಚ್ಚಿನ ಆಸ್ತಿಯನ್ನೆಲ್ಲ ಆಗತ್ಯ ಮತ್ತು ಸಾಮರ್ಥ್ಯಕ್ಕನುಗುಣವಾಗಿ ಸಮನಾಗಿ ಹಂಚುವುದು. ಹಾಗೆಯೇ, ದೇಶದಲ್ಲಿರುವ ದುಡಿವ ಶಕ್ತಿಯುಳ್ಳ ಎಲ್ಲರೂ ಹತ್ತಾರು ವರ್ಷಗಳು ದುಡಿದರೂ ಆಗುವಷ್ಟು ಕೆಲಸ ದೇಶದಲ್ಲಿದೆ. ಆದರೆ ಅದನ್ನು ಕೈಗೊಳ್ಳಲು ಬೊಕ್ಕಸದಲ್ಲಿ ಹಣ ಬೇಕು. ಆದಾಗಬೇಕಾದರೆ, ಸಂಪತ್ತನ್ನು ಉತ್ಪಾದಿಸುವ ಸಾಧನಗಳೆಲ್ಲ ಇಂದು ಕೆಲವೇ ಜನರ ಸ್ವಂತದ್ದಾಗಿರುವುದು ತಪ್ಪಿ, ಇಡೀ ದೇಶದ ಸಾಮಾಜಿಕ ಒಡೆತನಕ್ಕೆ ಒಳಪಡಬೇಕು. ಹಾಗೂ ಎಲ್ಲರ ಸಂಪತ್ತು ಮತ್ತು ಆದಾಯಕ್ಕೂ ಒಂದು ಗರಿಷ್ಠ ಮಿತಿಯಿದ್ದು,

(3 ನೇ ಪುಟಕ್ಕೆ)

**8ನೇ ಲೋಕಸಭೆಯಲ್ಲಿ ಪ್ರಮುಖ ಪಕ್ಷಗಳ**

## ಬಲಾಬಲ

| | |
|---|---|
| ಒಟ್ಟು ಸ್ಥಾನ: | |
| ಚುನಾಯಿತ | 542 |
| ನಾಮಕರಣ | 2 |
| ಒಟ್ಟು | 544 |
| ಡಿಸೆಂಬರ್ 24 ಮತ್ತು 27ರಂದು ಚುನಾವಣೆ ನಡೆದ ಸ್ಥಾನಗಳು | 508 |

| | |
|---|---|
| ಕಾಂಗ್ರೆಸ್(ಐ) | 401 |
| ತೆಲುಗುದೇಶಂ | 28 |
| ಸಿಪಿಎಂ | 22 |
| ಅಣ್ಣಾ ಡಿಎಂಕೆ | 12 |
| ಜನತಾ | 10 |
| ಸಿಪಿಐ | 6 |
| ಕಾಂಗ್ರೆಸ್(ಎಸ್) | 4 |
| ದ.ಮ.ಕಿ.ಪ. | 3 |
| ನ್ಯಾಶನಲ್ ಕಾನ್ಫರೆನ್ಸ್ (ಫಾರೂಕ್ ಅಬ್ದುಲ್ಲಾ) | 3 |
| ಬಿಜೆಪಿ | 2 |
| ಡಿಎಂಕೆ | 1 |
| ಇತರೆ ಪಕ್ಷಗಳು ಮತ್ತು ಪಕ್ಷೇತರರು | 16 |

**ಪದ್ಯ ದಂಕಣ**

### ಕನಸು

ದುಂಡು ಮೊಗದ
ನೀಳ ಜಡೆಯ
ಕೃಷ್ಣ ವರ್ಣದ್ದೆಣ್ಣು
ಬಾಗಿ ಬಳುಕಿ
ಕರೆದ ನೋಡಿ
ನೋಡಿ ನನ್ನ ಕಣ್ಣು
ಮನವದೋಡಿ
ಬಾಚಿ ತಬ್ಬಿ
ಬಿಗುವು ಸಿಗದೆ
ಮಂಚದಿಂದ ಜಾರಿಬಿದ್ದೆ—
ಮೈಯಿ ಕೈಯಿ
ನೋವು.

### ಗುರು ಶಿಷ್ಯರು

ಚರಣಸಿಂಗನ ಚೇಲ ರಾಜನಾರಾಯಣ
ಆಡಿದನು ಮಾಡಿಹನು ದೊಡ್ಡ ರಾಮಾಯಣ
ಆ ಲಂಕೆ ಈ ಲಂಕೆ ಹಾರಿದನು ಕೋತಿ
ಪೂರಾ ಸುಟ್ಟಿತು ಇವನ ಉದ್ದ ಲಾಂಗೂಲ
—'ನಂಶಾಸ್ತ್ರಿ'

## ಬಾಹ್ಯಾಂತರಿಕ್ಷದಲ್ಲಿ ತರಕಾರಿ ಕೃಷಿ

ಸೆಲ್ಯೂಟ್ ಕಕ್ಷಾನಿಲಯದ ಪ್ರಯೋಗಾಲಯದಲ್ಲಿ ವ್ಯೋಮಯಾನಿಗಳು ಬೆಳೆಸಿದ 20 ಬಗೆಯ ತರಕಾರಿಗಳ ಬೀಜಗಳನ್ನು ಇದೀಗ ಸೋವಿಯತ್ ವೈಜ್ಞಾನಿಕ ಕೇಂದ್ರಗಳಲ್ಲಿ ಅನ್ವೇಷಿಸಲಾಗುತ್ತಿದೆ. 237 ದಿನಗಳವರೆಗೆ ಬಾಹ್ಯಾಂತರಿಕ್ಷದಲ್ಲಿ ನೆಲೆಸಿ ದಾಖಲೆ ಸ್ಥಾಪಿಸಿದ ಸೋವಿಯತ್ ಗಗನಯಾನಿಗಳು ಧರೆಗೆ ಹಿಂದಿರುಗುವಾಗ ಈ ಬೀಜಗಳನ್ನು ತಂದಿದ್ದಾರೆ. ಸುದೀರ್ಘವಾದ

**ವಿಜ್ಞಾನದ ದೃಷ್ಟಿ**

ಭಾರರಹಿತ ಸ್ಥಿತಿಯಲ್ಲಿ ಸಸ್ಯಗಳ ಬೆಳವಣಿಗೆಯ ವೈಶಿಷ್ಟ್ಯಗಳನ್ನು ಅರಿಯಲು ಈ ಬೀಜಗಳ ವಿಶ್ಲೇಷಣೆಯಿಂದ ಸಾಧ್ಯವಾಗಬಹುದೆಂದು ವಿಜ್ಞಾನಿಗಳು ಭಾವಿಸುತ್ತಾರೆ. ಭಾವೀ ವ್ಯೋಮ ಯಾತ್ರಿಕರಿಗೆ ಅವಶ್ಯಕವಾಗುವ ತಾಜಾ ತರಕಾರಿಗಳನ್ನು ಒದಗಿಸುವುದೇ ವಿಜ್ಞಾನಿಗಳ ಅನ್ವೇಷಣೆಯ ಪ್ರಧಾನ ಗುರಿಯಾಗಿದೆ.

(ಸೌಜನ್ಯ: ಸೋವಿಯತ್ ಸಮಾಚಾರ)

## ರೈತ ಸಂಘದ ಅಧ್ಯಕ್ಷತೆಗೆ ವಿಷಾದದ ರಾಜೀನಾಮೆ

ಕೊಪ್ಪ : ಈ ಕರ್ನಾಟಕ ರಾಜ್ಯ ರೈತ ಸಂಘದ ಹೊನ್ನಗುಂಡಿ ಶಾಖೆಯ (ಬಸರೀಕಟ್ಟೆ, ಕೊಪ್ಪ ತಾ||) ಅಧ್ಯಕ್ಷರಾಗಿದ್ದ ಕೆ. ರಾಮೇಗೌಡ ಅವರು, ರೈತ ಸಂಘದ ರಾಜ್ಯ ನಾಯಕರ ನೀತಿಗಳ ಬಗ್ಗೆ ಬೇಸತ್ತು ತಮ್ಮ ಅಧ್ಯಕ್ಷ ಪದವಿಗೆ ವಿಷಾದದಿಂದ ರಾಜೀನಾಮೆ ನೀಡಿದ್ದಾರೆ.

ಅವರು ರೈತ ಸಂಘದ ಅಧ್ಯಕ್ಷರಿಗೆ ಬರೆದ ಪತ್ರದ ಮುಖ್ಯಾಂಶ ಹೀಗಿದೆ:

"ರಾಜ್ಯ ರೈತ ಸಂಘದ ಮೇಲ್ಕಂಡ ಶಾಖೆ ಆರಂಭವಾದಾಗಿನಿಂದ ಈ ವರೆಗೂ ರೈತರ ಹಿತಕ್ಕಾಗಿ ನನ್ನ ಕೈಲಾದಷ್ಟು ಕೆಲಸಮಾಡಿದ್ದೇನೆ. ಆದರೆ ರಾಜ್ಯ ಮತ್ತು ಜಿಲ್ಲಾ ನಾಯಕರುಗಳಿಂದ ಸೂಕ್ತ ಮಾರ್ಗದರ್ಶನವಿಲ್ಲದ ಕಾರಣ ರೈತರಿಗೆ ಅವರ ಸಮಸ್ಯೆಗಳ ಪರಿಹಾರದ ಬಗ್ಗೆ ಯಾವ ಸಲಹೆಯನ್ನೂ ಕೊಡಲು ಅಶಕ್ತನಾಗಿರುವುದರಿಂದ ರೈತರು ಸಂಘಟನೆಯಿಂದ ದೂರ ಸರಿಯುತ್ತಿದ್ದಾರೆ.

ಜನತಾ ಸರ್ಕಾರದ 2 ವರ್ಷಗಳ ಅಲ್ಪ ಅಧಿಕಾರಾವಧಿಯಲ್ಲಿ ರೈತರಿಗೆ ಕೊಟ್ಟಿರುವ ರಿಯಾಯ್ತಿಗಳು ತೃಪ್ತಿಕರವಾಗಿವೆ. ಇನ್ನುಳಿದ 3 ವರ್ಷಗಳ ಅವಧಿಯಲ್ಲಿ ಸರ್ಕಾರಕ್ಕೆ ನಾವು ಬೆಂಬಲ ಕೊಟ್ಟು ನಮ್ಮ ಉಳಿದ ಬೇಡಿಕೆಗಳನ್ನು ಈಡೇರಿಸಿಕೊಳ್ಳಬಹುದಿತ್ತು. ಆದರೆ ಈ ಸಲದ ಲೋಕಸಭಾ ಚುನಾವಣೆಯಲ್ಲಿ ನಮ್ಮ ಬೆಂಬಲದ ಅಭ್ಯರ್ಥಿಗಳನ್ನು ನಿಲ್ಲಿಸಿ, ರೈತರಿಗೆ ಕಳೆದ 35 ವರ್ಷಗಳಿಂದ ಕೊಟ್ಟಿದ್ದ ರಿಯಾಯ್ತಿಗಿಂತ ಹೆಚ್ಚಿನದನ್ನು ಕೇವಲ 2 ವರ್ಷಗಳಲ್ಲಿ ಕೊಟ್ಟ ಹೆಗಡೆ ಸರ್ಕಾರವನ್ನು ಸೋಲಿಸಿ, 139 ಮಂದಿ **ರೈತರನ್ನು ಗುಂಡಿಟ್ಟುಕೊಂದ ಸರ್ಕಾರಕ್ಕೆ ಬೆಂಬಲ ಕೊಟ್ಟಂತಾಗಿದೆ.**

ಇದರಿಂದಾಗಿ ಇಲ್ಲಿ ರೈತರು ತುಂಬ ಅಸಮಾಧಾನ ಗೊಂಡಿದ್ದಾರೆ. ಅಲ್ಲದೆ ನನಗೂ ರಾಜೀನಾಮೆ ಕೊಡಲು ಒತ್ತಾಯಿಸುತ್ತಿದ್ದಾರೆ. ನಮ್ಮ ಬೇಡಿಕೆಗಳ ಬಗ್ಗೆ ಸರ್ಕಾರ

(3 ನೇ ಪುಟಕ್ಕೆ)

## ಓದುಗರ ಪತ್ರಗಳು

# ದೌರ್ಬಲ್ಯ ನಾಟಕದ್ದೋ, ಪ್ರೇಕ್ಷಕರದೋ?

ಮಾನ್ಯರೆ,

'ಮುಂಜಾವು' 6.1.85 ರ ಸಂಚಿಕೆಯಲ್ಲಿ ಡಾ|| ಎಸ್. ವಿ. ಮಲ್ಲಿಕಾರ್ಜುನ ಭಟ್ಟರು ಕೊಪ್ಪದಲ್ಲಿ ನಡೆದ ನಾಟಕೋತ್ಸವದ ಒಂದು ಮೌಲಿಕವಾದ ಸಮೀಕ್ಷೆ ನೀಡಿದ್ದಾರೆ. ಅದರಲ್ಲಿ ವ್ಯಕ್ತವಾದ ವಿಚಾರಗಳಿಗೆ ಪೂರಕವಾಗಿ, ಒಬ್ಬ ಸಹೃದಯಿ ಪ್ರೇಕ್ಷಕನಾಗಿ ನನ್ನ ಕೆಲವು ಅನಿಸಿಕೆಗಳನ್ನು ನಾಟಕಾಸಕ್ತರೊಂದಿಗೆ ಹಂಚಿಕೊಳ್ಳ ಬಯಸುತ್ತೇನೆ.

"ಸಾಂಕೇತಿಕ ನಾಟಕಗಳ ಒಂದು ದೌರ್ಬಲ್ಯವೆಂದರೆ ಅವು ಸಾಮಾನ್ಯ ಪ್ರೇಕ್ಷಕರಿಗೆ ಅಸಂಬದ್ಧ ಹರಟೆಯಾಗಿ ಕಾಣುವುದು" ಎಂದು ಡಾ|| ಎಸ್ವಿಎಂ ಹೇಳಿದ್ದಾರೆ. ಆದರೆ ಇದು ಆ ನಾಟಕಗಳ ದೌರ್ಬಲ್ಯ ಎನ್ನುವುದಕ್ಕಿಂತಲೂ ಇಂಥ ನಾಟಕಗಳನ್ನು ಸವಿಯಲಾರದಷ್ಟು ಸಂವೇದನೆ ಜಡವಾಗಿ ಹೋಗಿರುವ ನಮ್ಮ ಪ್ರೇಕ್ಷಕರ ದೌರ್ಬಲ್ಯ ಎನ್ನುವುದು ಹೆಚ್ಚು ಸರಿ ಎಂದು ನನಗನ್ನಿಸುತ್ತದೆ.

ಸಾಮಾನ್ಯವಾಗಿ ಜನ ಅಗ್ಗದ ತಮಾಷೆಗೆ, ಯಾವುದೇ ಯೋಚನೆಗೆ ಹಚ್ಚದ ಕಥಾವಸ್ತುವಿಗೆ ಬೇಗ ಪ್ರತಿಕ್ರಿಯಿಸುತ್ತಾರೆ. ಆದರೆ ನಮ್ಮ ಸುತ್ತಮುತ್ತ ಕಾಣುವ ದಾರಿದ್ರ್ಯ, ಅಸಮಾನತೆ, ಕ್ರೌರ್ಯ ಮುಂತಾದವುಗಳ ಕಾರಣಗಳ ಬಗ್ಗೆ ಆಳವಾಗಿ ಯೋಚನೆ ಮಾಡುವುದಕ್ಕೆ ಆಲಸ್ಯ ತೋರಿಸುತ್ತಾರೆ. ಇಂಥ ತೀವ್ರವಾದ ಸಮಸ್ಯೆಗಳನ್ನು, ಗಂಭೀರವಾದ ವಿಷಯಗಳನ್ನು ಕುರಿತ ಕಥಾವಸ್ತುವಿನ ನಿರೂಪಣೆ ಅಷ್ಟು ಸರಳವಾಗಿರಲು ಸಾಧ್ಯವಿಲ್ಲ. ಅಷ್ಟು ಸರಳಗೊಳಿಸಿದರೆ ಪೂರಾ ವಾಚ್ಯವಾಗಿ, ವಸ್ತುವಿನ ಗಾಂಭೀರ್ಯ ಮತ್ತು ಬಿಗು ಸೋಲುತ್ತದೆ.

ಆದ್ದರಿಂದ ಗಂಭೀರ ಕಥಾವಸ್ತುವುಳ್ಳ ನಾಟಕ ನೋಡುವಾಗ ಪ್ರೇಕ್ಷಕ ತನ್ನ ಮನಸ್ಸನ್ನು ಬಹಳಷ್ಟು ಆಲೋಚನೆಗೆ ಹಚ್ಚಬೇಕಾಗುತ್ತದೆ. ಎಸ್ವಿಎಂರವರೇ ಹೇಳುವಂತೆ, ಮನರಂಜನೆಯ ಜೊತೆಗೆ ಸಾಮೂಹಿಕ ಜಾಗೃತಿಗೆ ಸಹ ಒಂದು ಪ್ರಬಲ ಮಾಧ್ಯಮವಾಗಿರುವ ನಾಟಕಗಳು ಮನರಂಜನೆಯ ಹೆಸರಿನಲ್ಲಿ ಆಳವಿಲ್ಲದ, ಬರೀ ಹೊತ್ತು ಕಳೆಯುವ ಸಾಧನವಾಗುವುದು ಸರಿಯಲ್ಲ. ಹೀಗಾಗಿ, ಜನರ ಅಭಿರುಚಿಗೆ ತಕ್ಕಂಥ, ಜನರಿಗೆ ಬೇಕಾದ, ಅವರನ್ನು ಮುಟ್ಟುವ, ತಟ್ಟುವ ನಾಟಕಗಳನ್ನು ಆಡುವುದರ ಜೊತೆಗೇ, ಅವರ ಅಭಿರುಚಿಯನ್ನು ಉತ್ತಮಗೊಳಿಸುವ, ಅವರ ಸಂವೇದನೆಯನ್ನು ಹರಿತಗೊಳಿಸುವ ಹೊಣೆಯೂ ನಾಟಕ ತಂಡಗಳ ಮೇಲೆ ಇದೆ. ಆದರೂ, ಇಂಥ ನಾಟಕಗಳು ಮನರಂಜನೆ ಮತ್ತು ಚುರುಕುತನಗಳನ್ನು ಕಳೆದುಕೊಂಡು ಬರೀ ಶುಷ್ಕವಾಗಿ ನಾಟಕದ ತಿರುಳಿನ ಕಡೆ ಪ್ರೇಕ್ಷಕರ ಲಕ್ಷ್ಯವೇ ಹರಿಯದ ಹಾಗೆ ಆಗದಂತೆಯೂ ಎಚ್ಚರಿಕೆ ವಹಿಸಬೇಕಾಗುತ್ತದೆ.

ಹೀಗೆ ಪ್ರೇಕ್ಷಕರ ಅಭಿರುಚಿಯನ್ನು ಬೆಳೆಸುವ ಕಾರ್ಯ ಅಂಕುರ ಬಳಗದವರ ಹಿಂದಿನ ನಾಟಕಗಳಿಂದ ಸಾಕಷ್ಟು ನಡೆದಿದೆ ಎನ್ನುವುದಕ್ಕೆ, 'ಪೋಲೀಸರಿದ್ದಾರೆ, ಎಚ್ಚರಿಕೆ' ನಾಟಕ ಪ್ರದರ್ಶನದ ಸಮಯದಲ್ಲಿ, (ಎದುರು ಕುಳಿತಿದ್ದ ಮಕ್ಕಳನ್ನು ಬಿಟ್ಟು) ಹೆಚ್ಚಿನಂಶ ಪ್ರೇಕ್ಷಕರು, ನಾಟಕ ಸಂಪೂರ್ಣ ಅರ್ಥವಾಗದಿದ್ದೂ ಕೂಡಾ, ಉಸಿರು ಬಿಗಿಹಿಡಿದು ನಾಟಕವನ್ನು ವೀಕ್ಷಿಸುತ್ತಿದ್ದುದೇ ಸಾಕ್ಷಿ ಎಂದು ನನ್ನ ಅನಿಸಿಕೆ.

ಈ ಮಾತುಗಳನ್ನು ಬರೆಯುತ್ತಿದ್ದಂತೆಯೇ ನನಗೆ ಹೆಗ್ಗೋಡಿನ ಉದಾಹರಣೆ ಕಣ್ಣೆದುರು ನಿಲ್ಲುತ್ತಿದೆ. ಹೆಗ್ಗೋಡಿನಂಥ ಸಣ್ಣ ಗ್ರಾಮದಲ್ಲಿ ಇಂದು ಅವಿದ್ಯಾವಂತರಾದ ಜನರೂ ಸಹ ಅತ್ಯಂತ ಆಧುನಿಕ ನಾಟಕಗಳಿಗೂ ಸ್ಪಂದಿಸುವ ಮಟ್ಟದ ಸಂವೇದನಾ ಶೀಲರಾಗಿದ್ದರೆ, ಅದಕ್ಕೆ ಕೆ.ವಿ. ಸುಬ್ಬಣ್ಣನವರ ಹಲವು ವರ್ಷಗಳ ಪ್ರಯತ್ನವೇ ಕಾರಣವಾಗಿದೆ.

ಆದ್ದರಿಂದ ಇಂಥ ಆಧುನಿಕ ನಾಟಕಗಳ ಪ್ರದರ್ಶನ ಮೇಲಿಂದ ಮೇಲೆ ನಡೆದರೆ, ಕೊಪ್ಪದಂತಹ ಸಾಂಸ್ಕೃತಿಕವಾಗಿ ಹಿಂದುಳಿದ ಪ್ರದೇಶದಲ್ಲೂ, ಈ ನಾಟಕಗಳನ್ನು ಸವಿಯಬಲ್ಲವರ ಸಂಖ್ಯೆ ಬೆಳೆದೀತು.

—ಒಬ್ಬ ನಾಟಕಾಸಕ್ತ

# ದೇಶದ ಮೂಲಭೂತ ಸಮಸ್ಯೆಗಳ ನಿವಾರಣೆ ಈಗ ಕಾಂಗ್ರೆಯ ನೈತಿಕ ಹೊಣೆ

ಮಾನ್ಯರೆ,

ಕಾಂಗ್ರೆ ಪಕ್ಷವನ್ನು ದೇಶದ ಜನತೆ ಮುಕ್ಕಾಲು ಭಾಗದಷ್ಟು ಬಹುಮತ ನೀಡಿ ಅಧಿಕಾರಕ್ಕೆ ಕಳಿಸಿದ್ದಾರೆ. ಜನತೆಗೆ ಆ ಪಕ್ಷ ನೀಡಿದ್ದ ಭರವಸೆಗಳನ್ನು ಈಡೇರಿಸಲು ಈಗ ಯಾವುದೇ ಅಡ್ಡಿ ಇಲ್ಲವಾಗಿದ್ದು, ದೇಶದ ಬಡತನ, ನಿರುದ್ಯೋಗ, ಅಸಮಾನತೆಗಳಂತಹ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಬೇಕೆಂದು ಸಿ.ಪಿ.ಐ. ನ ಚಿಕ್ಕಮಗಳೂರು ಜಿಲ್ಲಾ ಮಂಡಳಿ ಒತ್ತಾಯಿಸುತ್ತದೆ.

ದಿವಂಗತ ಶ್ರೀಮತಿ ಇಂದಿರಾ ಗಾಂಧಿಯವರು ಪ್ರಧಾನಿಯಾಗಿದ್ದಾಗ ಜಿಲ್ಲೆಯಲ್ಲಿ ಶಂಕುಸ್ಥಾಪನೆ ಮಾಡಿದ ಹೊನ್ನಮ್ಮನ ಹಳ್ಳ ಕುಡಿವ ನೀರಿನ ಯೋಜನೆ ಮತ್ತು ಸಾರ್ವಜನಿಕ ಆಸ್ಪತ್ರೆ, ಹಾಗೂ ಕಡೂರು-ಚಿಕ್ಕಮಗಳೂರು ರೈಲುಮಾರ್ಗ, ವಿಜಯನಗರ ಉಕ್ಕಿನ ಕಾರ್ಖಾನೆಯ ಯೋಜನೆಗಳು ಮುಂತಾದವು ಅವರ ಮಗ ಪ್ರಧಾನಿಯಾಗಿರುವ ಈ ಕಾಲದಲ್ಲಾದರೂ ಆಗುವಂತೆ ಜಿಲ್ಲೆಯ ಹಾಗೂ ರಾಜ್ಯದ ಕಾಂಗ್ರೆ ಸಂಸದೀಯರು ಪ್ರಯತ್ನಿಸಬೇಕಾಗಿರುವುದು ಅವರ ನೈತಿಕಹೊಣೆಗಾರಿಕೆಯಾಗಿದೆ.

ಕಾಂಗ್ರೆ ತನಗೆ ಶೇ. 75 ಭಾಗದಷ್ಟು ಬಹುಮತವಿರುವ ಈ ಕಾಲದಲ್ಲಾದರೂ ಜನತೆಯ ಮೂಲಭೂತ ಸಮಸ್ಯೆಗಳ ನಿವಾರಣೆಗೆ ವಿಫಲವಾದಲ್ಲಿ ಅದು ಜನತೆಯ ನಂಬಿಕೆಗೆ ಮಾಡಿದ ಮಹಾ ದ್ರೋಹವಾಗುತ್ತದೆ.

—ಬಿ. ಕೆ. ಸುಂದರೇಶ್,
ಜಿಲ್ಲಾ ಕಾರ್ಯದರ್ಶಿ.

## .... ರಾಜೀನಾಮೆ

(2 ನೇ ಪುಟದಿಂದ)

ದೊಂದಿಗೆ ಚರ್ಚಿಸಿ ಬಗೆಹರಿಸಿಕೊಳ್ಳುವುದು ಬಿಟ್ಟು ಚಳುವಳಿ ಮತ್ತು ಸರ್ಕಾರ ಉರುಳಿಸುವುದು ಒಂದೇ ಗುರಿಯೆ? ಎಂದು ಕೇಳುತ್ತಿದ್ದಾರೆ.

ನಮ್ಮ ಅಭ್ಯರ್ಥಿಗಳೆಲ್ಲರೂ ಠೇವಣಿ ಕಳೆದುಕೊಂಡಿದ್ದಾರೆ. ಇದರಿಂದ ರೈತರ ಗೌರವವನ್ನು ಸಂಘದವರು ಹರಾಜು ಹಾಕಿದಂತಾಗಿದೆ.

ಆದ್ದರಿಂದ, ರಾಜ್ಯ ಮಟ್ಟದಿಂದ ಹಿಡಿದು ತಾ|| ಮಟ್ಟದವರೆಗೆ, ಪ್ರೊ|| ನಂಜುಂಡಸ್ವಾಮಿಯವರೂ ಸೇರಿದಂತೆ ಕೆಲವು ನಾಯಕರು ರಾಜೀನಾಮೆ ಕೊಡುವುದು ಒಳ್ಳೆಯದು. ಇಲ್ಲವಾದರೆ ಇವರಿಗೆ ತಕ್ಕ ಪಾಠವನ್ನು ರೈತರೇ ಕಲಿಸುತ್ತಾರೆ. ಸಂಘದಲ್ಲಿ ಈಗ ಇರುವ ನಾಯಕರುಗಳು ಇರುವವರೆಗೆ ನಾನು ರಾಜೀನಾಮೆ ಕೊಟ್ಟಿರುತ್ತೇನೆ."

# ಚುನಾವಣೆ ಫಲಿತಾಂಶದ ಪ್ರಭಾವ

(2 ನೇ ಪುಟದಿಂದ)

ಅದಕ್ಕಿಂತ ಹೆಚ್ಚಿನದೆಲ್ಲ ಸಮಾಜಕ್ಕೆ ಸೇರಿ ಎಲ್ಲರಿಗೂ ಹಂಚಿಕೆಯಾಗಬೇಕು. ಈ ಮೂಲಭೂತವಾದ ಕಾರ್ಯಕ್ರಮವಿಲ್ಲದೆ ನಡೆಸುವ ಯಾವುದೇ ಸುಧಾರಣೆ, ಅಭಿವೃದ್ಧಿ. ಕಲ್ಯಾಣ ಕಾರ್ಯಕ್ರಮಗಳೂ ಶೇಪೆಯ, ಬಣ್ಣದ ಕೆಲಸವಾಗುತ್ತವೆ. ಹೊಟ್ಟೆಯ ಹುಣ್ಣಿಗೆ ಮೇಲಿಂದ ಮುಲಾಮು ಸವರಿದಂತೆ ಮಾತ್ರ.

ಯಾವ ರಾಜಕೀಯ ಪಕ್ಷ ಕಟ್ಟುನಿಟ್ಟಾಗಿ ಈ ಗುರಿಯನ್ನಿಟ್ಟುಕೊಂಡು ಕೆಲಸ ಮಾಡಲು ಸಿದ್ಧವಿದೆ? ಎಲ್ಲ ಪಕ್ಷಗಳಲ್ಲೂ ಅಲ್ಲೊಬ್ಬರು–ಇಲ್ಲೊಬ್ಬರು ಇಂಥ ಆಲೋಚನೆಗಳಿದ್ದವರು ಸಿಗಬಹುದು. ಆದರೆ ಅದಕ್ಕೆ ಯಾವ ಪರಿಣಾಮವೂ ಇಲ್ಲ.

### ರಾಜೀವ್ ಗಾಂಧಿ ಮಾಡಿಯಾರೆ ?

ರಾಜೀವ್ ಗಾಂಧಿಯೇ ಆದರೂ ಇದನ್ನು ಮಾಡಬಲ್ಲರೆ? ಎರಡು ಕಾರಣಕ್ಕಾಗಿ ಇದು ಸಾಧ್ಯವಿಲ್ಲ.

ಒಂದು—ಅವರು ಹಾಗೆ ಹೆಜ್ಜೆ ಇಟ್ಟರೆ. ಇವತ್ತು ಅವರನ್ನು ತಲೆಯ ಮೇಲೆ ಹೊತ್ತಿರುವ ಅವರ ಇಡೀ ಪಕ್ಷ ನಾಳೆ ಇಡಿಯಾಗಿ ಅವರಿಗೆ ತಿರುಗಿ ಬೀಳುತ್ತದೆ, ಅವರನ್ನು ಕಿತ್ತೊಗೆಯುತ್ತದೆ. ಅವರ ಪಕ್ಷಕ್ಕೆ ಬೆಂಬಲವಾಗಿರುವ ಅಸಂಖ್ಯಾತ ಬಡ ಜನತೆ ನಾಯಕರ ಹಿಂಬಾಲಕರು ಮತ್ತು ಗುಲಾಮರು ಹೊರತು ಸಂಘಟಿತರಲ್ಲ. ಒಟ್ಟಾಗಿ ತಮ್ಮ ನಾಯಕರನ್ನ ಉಳಿಸಿಕೊಳ್ಳಬಲ್ಲ ಸಮೂಹ ಶಕ್ತಿ ಅವರಿಗಿಲ್ಲ.

ಎರಡನೆಯ ಕಾರಣವೆಂದರೆ, ದೇಶವನ್ನು ನಿಜವಾಗಿ ಆಳುವುದು ಈ ಯಾವ ಪಕ್ಷಗಳೂ ಅಲ್ಲ–ದೇಶದ ಸಂಪತ್ತಿನ ಒಡೆಯರಾದ ಆರ್ಥಿಕ ಹಿತಾಸಕ್ತಿಗಳು ನಿಜವಾಗಿ ಆಳುವವರು. ಇವರ ಸಂಪತ್ತು ವೃದ್ಧಿಯಾಗುವುದಕ್ಕೆ ವಿರುದ್ಧವಾದ ಯಾವ ರೀತಿಯಲ್ಲೂ ಆಡಳಿತ ನಡೆಯಲು ಇವರು ಬಿಡುವುದಿಲ್ಲ. ರಾಜಕೀಯ ಪಕ್ಷಗಳ ನಿಜವಾದ ಮಾಲೀಕರು ಮತ್ತು ಪೋಷಕರು ಇವರೇ.

### ಆಳುವ ವರ್ಗ

ಹಳ್ಳಿಗಳಲ್ಲಿನ ಭೂಮಾಲೀಕ ವರ್ಗ ಮತ್ತು ದೇಶದ ಆಳದ ಆಳದಲ್ಲಿ ತನ್ನ ಬೇರು ಹರಡಿರುವ ಬಂಡವಾಳಶಾಹಿ ವರ್ಗ ಒಟ್ಟಾಗಿ ಈ ದೇಶದ ಆಳುವ ವರ್ಗವಾಗಿದ್ದು, ಇವರ ಮೇಲೆ ಪೂರ್ಣ ಹತೋಟಿ ಇಟ್ಟುಕೊಂಡಿರುವುದು ಈ ದೇಶದ ಅರ್ಥ ವ್ಯವಸ್ಥೆಯ ಎಲ್ಲ ಹಂತಗಳಲ್ಲೂ ಹರಡಿರುವ ಅಂತರ ರಾಷ್ಟ್ರೀಯ ಬಂಡವಾಳಶಾಹಿ. "ನೆರವು, ಸಾಲ, ಸಹಯೋಗ, ಸಹಕಾರ"ಗಳ ಹೆಸರಲ್ಲಿ ಹೊರದೇಶಗಳ ('ಸಮಾಜವಾದಿ' ಎಂದುಕೊಳ್ಳುವ ದೇಶಗಳೂ ಸೇರಿದಂತೆ) ಈ ಒಡೆಯರು ನಮ್ಮ ದೇಶದ ವ್ಯವಸ್ಥೆಯ ಮೇಲೆ ಪೂರ್ಣ ಹತೋಟಿ ಹೊಂದಿರುವುದು ಸುಲಭವಾಗಿ ಗೊತ್ತಾಗುವುದಿಲ್ಲ.

### ಸಂತೃಪ್ತಿ, ಸಮೃದ್ಧಿ ಐಕ್ಯತೆಗೆ ಮೂಲ

ಹಳ್ಳಿಗಳ ಈ ದೇಶದಲ್ಲಿ ಪ್ರತಿ ಹಳ್ಳಿಯೂ ಸಂಪತ್ತು ಮತ್ತು ಪ್ರತಿಭೆಯ ಆಗರವಾಗಿದ್ದು, ಆ ಸಂಪತ್ತಿನ ನ್ಯಾಯಯುತವಾದ ಹಂಚಿಕೆಯಂಥ ಮೂಲಭೂತ ಸುಧಾರಣೆಯಿಂದ ಜನರ ಆದಾಯ ಹೆಚ್ಚಿ ಜೀವನ ಪರಿಸ್ಥಿತಿ ಸುಧಾರಿಸಿದರೆ ಪಟ್ಟಣಗಳಿಗೆ ವಲಸೆ ತಗ್ಗುತ್ತದೆ. ಪಟ್ಟಣಗಳಲ್ಲೂ ಸಮಸ್ಯೆ ಕಮ್ಮಿಯಾಗುತ್ತದೆ. ಆಹಾರ ಉತ್ಪಾದನೆ ಹೆಚ್ಚುವುದರ ಜೊತೆಗೆ ಜನರ ಜೀವನಾವಶ್ಯಕ ವಸ್ತುಗಳ ಕೊಳ್ಳುವಿಕೆಯೂ ಹೆಚ್ಚಿ ದೇಶೀಯ ಮಾರುಕಟ್ಟೆ ಅಪಾರವಾಗಿ ಬೆಳೆಯುತ್ತದೆ. ಆಗ, ತಮ್ಮ ಉತ್ಪಾದನೆಗಳಿಗೆ ಗಿರಾಕಿಯಿಲ್ಲದೆ ನರಳುವ ದೇಶೀಯ ಕೈಗಾರಿಕೆಗಳೂ ಸುಧಾರಿಸಿ, ಅಲ್ಲಿನ ಕಾರ್ಮಿಕರ ಆದಾಯವೂ ಉತ್ತಮಗೊಳ್ಳುತ್ತದೆ.

ದೇಶದೊಳಗೆ ಜನಜೀವನದಲ್ಲಿ ಸಮೃದ್ಧಿ ಸಂತೃಪ್ತಿ ಹೆಚ್ಚಿದಂತೆ ನಾಲ್ಕಾಣೆ–ಎಂಟಾಣೆ–ನಾಲ್ಕು ಮೆಟ್ಟು ಭೂಮಿ–ಒಂದು ಉದ್ಯೋಗ– ಮುಂತಾದವುಗಳಿಗಾಗಿ ನಡೆಯುವ ಕ್ಷುಲ್ಲಕ ಆಂತರಿಕ ಬಡಿದಾಟಗಳು ತಗ್ಗಿ ಜನರ ನಡುವೆ ಅರಿವು, ಸಹಕಾರ, ಒಗ್ಗಟ್ಟು ಬೆಳೆಯುತ್ತವೆ. ಇದರಿಂದ ದೇಶ ಬಲಿಷ್ಠವಾಗಿ ಹೊರ ದೇಶದವರ ಹಿಡಿತ ಕಳಚುವುದಲ್ಲದೆ ದೇಶದೊಳಗಿನ ಲಾಭಬಡುಕರ ದುರಾಸೆ, ಕಳ್ಳ ವ್ಯವಹಾರಗಳಿಗೆ ಜನತೆ ಕಡಿವಾಣ ಹಾಕಲು ಸಮರ್ಥರಾಗುತ್ತಾರೆ. ಹಾಗೇ ಹಳ್ಳಿಗಳಲ್ಲಿ ಭೂಮಾಲೀಕರ ಪಾಳೇಗಾರಿಕೆ ಜನಶಕ್ತಿಯೆದುರು ಕುಸಿಯುತ್ತದೆ.

ಇಂಥದೊಂದು ಸರ್ವತೋಮುಖ ಅಭಿವೃದ್ಧಿಯ ಮಾರ್ಗವು ದೇಶದ ಸಮಸ್ತ ಸಂಪತ್ತಿನ ನ್ಯಾಯಯುತ ಹಂಚಿಕೆ ಮತ್ತು ಸಮಾಜೀಕರಣದಿಂದ ಆರಂಭವಾಗುತ್ತದೆ. ಆದರೆ ಈಗ ದೇಶದ ನಿಜವಾದ ಸೂತ್ರ ಹಿಡಿ

(4 ನೇ ಪುಟಕ್ಕೆ)

# ಚುನಾವಣೆಯ ಫಲಿತಾಂಶದ ಪ್ರಭಾವ

(3ನೇ ಪುಟದಿಂದ)

ದಿರುವ ಶಕ್ತಿಗಳು ಇಂಥ ಬೆಳವಣಿಗೆಗೆ ಅವಕಾಶ ಕೊಟ್ಟು ತಾವು ಪೆಟ್ಟು ತಿನ್ನಲು ಸಿದ್ಧವಿರುತ್ತವೆಯೆ? ಇವರ ಪೋಷಣೆಯಲ್ಲಿರುವ ಈ ಎಲ್ಲ ನೂರೆಂಟು ರಾಜಕೀಯ ಪಕ್ಷಗಳು, ಅಸಂಖ್ಯ 'ನಾಯಕರು' ಇಂಥದೊಂದು ಸಮಗ್ರ ಬದಲಾವಣೆಯನ್ನು ತರಲು ಕೆಲಸ ಮಾಡಬಲ್ಲರೆ? ಖಂಡಿತ ಸಾಧ್ಯವಿಲ್ಲ.

### ಹೇಗೆ ಸಾಧ್ಯ ?

ಆದರೆ, ಅಂಥದೊಂದು ಇಡೀ ಬದಲಾವಣೆ, ಬೆಳವಣಿಗೆ ಈ ದೇಶಕ್ಕೆ ಬೇಕೇ ಬೇಕು. ಅದು ಹೇಗೆ ಸಾಧ್ಯ ?

ಅದು ಸಾಧ್ಯವಾಗಬೇಕಾದರೆ ಅದು ಯಾರಿಗೆ ಬೇಕೋ ಅವರೇ–ಅಂದರೆ ನಾವೇ–ಅದನ್ನು ಉಂಟುಮಾಡಲು ಸಮರ್ಥರಾಗಬೇಕು. ಏಳಿಗೆ ಮತ್ತು ಸಮೃದ್ಧಿಯ ಅಗತ್ಯವಿರುವ ದಲಿತರು–ದುರ್ಬಲರು, ರೈತರು, ಕಾರ್ಮಿಕರು ಹಾಗೂ ಪ್ರಜಾಪ್ರಭುತ್ವ ಪ್ರೇಮಿಗಳಾದ ಜನತೆ ಒಗ್ಗಟ್ಟಾದರೆ ಮಾತ್ರ ಇದು ಸಾಧ್ಯ.

### ಸಮಸ್ಯೆಯ ಬುಡಕ್ಕೇ

ಇಂಥ ಜನರ ಸಂಘಟನೆಗಳು ಮಾತ್ರ ಸಮಸ್ಯೆಗಳ ಬುಡಕ್ಕೆ ಹೊಕ್ಕು ಅದನ್ನು ಕೀಳಲು ಪ್ರಯತ್ನಿಸುತ್ತವೆ. ನಮ್ಮ ಮುಂದೆ ದಲಿತ ಸಂಘ, ರೈತ ಸಂಘ ಮತ್ತು ಕೆಲವು ಬಲಿಷ್ಠವಾದ (ರಾಜಕೀಯ ಪಕ್ಷಗಳ ಕೇವಲ ಬಾಲಂಗೋಚಿಗಳಲ್ಲದ) ಕಾರ್ಮಿಕ ಸಂಘಗಳಿವೆ. ಅವು ಮಾತ್ರ ಲಂಚ, ಸಂಪತ್ತಿನ ಕೇಂದ್ರೀಕರಣ, ಮಧ್ಯವರ್ತಿ ಲಾಭಬಡುಕತನ ಹಾಗೂ ಪರಕೀಯರ ದಾಸ್ಯ–ಒತ್ತಡಗಳ ವಿರುದ್ಧ ಕೆಲಸ ಮಾಡುತ್ತಿವೆ. ಈ ಸಂಘಗಳ ಅಡಿ ಸಂಘಟಿತರಾಗುತ್ತಿರುವ ಜನಸಮೂಹದ ಸಂಘಟಿತ ಶಕ್ತಿಗೆ ಮಾತ್ರ ಅಧಿಕಾರಶಾಹಿಗಳು, ರಾಜಕಾರಣಿಗಳು ಮತ್ತು ಎಲ್ಲ ವಂಚಕ–ಸುಲಿಗೆಕೋರರು ಹೆದರುತ್ತಿದ್ದಾರೆ (ಮತ್ತು ಅದಕ್ಕಾಗಿಯೇ ಅವನ್ನು ಬೆಳೆಯಲು ಬಿಡದಂತೆ ಎಲ್ಲಾ ತಂತ್ರ ಉಪಯೋಗಿಸುತ್ತಿದ್ದಾರೆ.)

ಈ ಸಂಘಗಳೂ ತಪ್ಪು ಮಾಡಬಹುದು. ನಿಜವಾಗಿ ಜನರನ್ನು ಮುನ್ನಡೆಸುವ ಶಕ್ತಿ ಇರುವುದು ಈ ಸಂಘಗಳಲ್ಲೇ. ಆದರೆ ಇಲ್ಲಿ ತಪ್ಪುಗಳು ಪಾಠಗಳಾಗಿ, ಹೊಸ ಹೊಸ ದಾರಿಗಳಿಗೆ ದೀಪಗಳಾಗಿ ಮಾರ್ಪಾಡಾಗುತ್ತವೆ.

### ದಾರಿ ತೋರಬಲ್ಲ ಶಕ್ತಿ

ಜನತೆಯ ಇಂಥ ಒಗ್ಗಟ್ಟಿನ ಶಕ್ತಿ ಮಾತ್ರ ಈ ದೇಶಕ್ಕೆ ದಾರಿ ತೋರಿಸಬಲ್ಲದು, ಇಲ್ಲಿನ ನರಕದ ಬದುಕಿನಿಂದ ಜನತೆಗೆ ಇಂದಲ್ಲ ನಾಳೆ ವಿಮೋಚನೆ ದೊರಕಿಸಬಲ್ಲದು. ನೇರವಾಗಿ ಆಲೋಚಿಸ ಬಲ್ಲವರಿಗೆ ಈ ಶಕ್ತಿಯ ಏಳಿಗಳು ಈಗಾಗಲೇ ಕಾಣಸಿಗುತ್ತವೆ.

ಈಗ ಯೋಚಿಸಿ ನೋಡಿ–ಈ ಚುನಾವಣೆಗಳ ಸೋಲು-ಗೆಲುವುಗಳು ದೇಶದ ನಿಜವಾದ ಸಮಸ್ಯೆಗಳ ಮೂಲಭೂತ ನಿವಾರಣೆಯ ದಿಕ್ಕಿನಲ್ಲಿ ಯಾವ ರೀತಿಯಲ್ಲಾದರೂ ಗಣನೀಯವೆನ್ನಿಸುತ್ತವೆಯೆ ?

–ಸಿರಿಮನೆ ನಾಗರಾಜ್

## ಕೃತಜ್ಞತೆ

ಶೃಂಗೇರಿ: ಲೋಕಸಭಾ ಚುನಾವಣೆಯಲ್ಲಿ ಸಿ.ಪಿ.ಐ. ಅಭ್ಯರ್ಥಿ ಬಿ. ಕೆ. ಸುಂದರೇಶ್‌ರಿಗೆ ಬೆಂಬಲ ಕೊಟ್ಟ ಮತದಾರರು ಹಾಗೂ ಮಿತ್ರ ಪಕ್ಷಗಳ ಕಾರ್ಯಕರ್ತರಿಗೆ ಮಿತ್ರ ಪಕ್ಷಗಳ ಚುನಾವಣಾ ಸಮಿತಿ ಕಾರ್ಯದರ್ಶಿ ಅಮ್ಮೂರು ನಾಗರಾಜ್ ಕೃತಜ್ಞತೆ ಸಲ್ಲಿಸಿದ್ದಾರೆ.

# ಶೃಂಗೇರಿ ತಾ. ವ್ಯ. ಮಾ. ಸ. ಸಂಘದ ಸರ್ವ ಸದಸ್ಯರ ಸಭೆ ನಡೆಸಲು ಒತ್ತಾಯ

ಶೃಂಗೇರಿ: ಇಲ್ಲಿನ ತಾ.ವ್ಯ.ಮಾ. ಸಹಕಾರ ಸಂಘದ ಸರ್ವಸದಸ್ಯರ ಸಭೆಯನ್ನು ಜನವರಿಯಲ್ಲಿ ನಡೆಸಬೇಕೆಂದು ನವೆಂಬರ್ ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನವಾಗಿದ್ದರೂ ಆಡಳಿತ ಮಂಡಳಿಯ ಕೆಲವು ಹಿತಾಸಕ್ತಿಗಳು ವಿಧಾನ ಸಭಾ ಚುನಾವಣೆಯ ನೆಪದಿಂದ ಅದನ್ನು ಮುಂದೂಡಲು ಪ್ರಯತ್ನಿಸುತ್ತಿರುವುದಾಗಿ ನಿರ್ದೇಶಕರುಗಳಾದ ಕೆ.ಎಸ್. ಧರ್ಮಪ್ಪ ಮತ್ತು ಕೆ.ಎಲ್ ದೇವಪ್ಪಗೌಡ ಆರೋಪಿಸಿದ್ದಾರೆ.

ಲೆಕ್ಕ ಪತ್ರಗಳು ಸರಿಯಿಲ್ಲದೆ ನಷ್ಟ ಅನುಭವಿಸುತ್ತಿರುವ ಸಂಘದ ಆಡಳಿತ ಸುಸೂತ್ರವಾಗಿ ನಡೆಯಬೇಕಾದರೆ ಸರ್ವಸದಸ್ಯರ ಸಭೆಯ ತೀರ್ಪು ಆಗತ್ಯ. ಆದ್ದರಿಂದ ಕೂಡಲೇ ಸಭೆ ಕರೆಯದಿದ್ದರೆ ಸಂಘದಲ್ಲಿ ಕಳಕಳಿ ಇರುವ ಎಲ್ಲಾ ಸದಸ್ಯರನ್ನು ಸೇರಿಸಿಕೊಂಡು ಚಳುವಳಿ ನಡೆಸುವುದಾಗಿಯೂ ಅವರು ಎಚ್ಚರಿಸಿದ್ದಾರೆ.

# ಜಿಲ್ಲೆಯ ಎಲ್ಲ ಪಂಚಾಯ್ತಿಗಳಲ್ಲಿ ಭೂಮಂಜೂರಾತಿ ಪಟ್ಟಿ ಪ್ರಕಟಣೆ

ಚಿಕ್ಕಮಗಳೂರು: ಜಿಲ್ಲೆಯ ಎಲ್ಲಾ ಪಂಚಾಯ್ತಿ ಕಚೇರಿಗಳಲ್ಲಿ ಆಯಾ ಪಂಚಾಯ್ತಿ ವ್ಯಾಪ್ತಿಯಲ್ಲಿ ಮಂಜೂರಾಗಿರುವ ಜಮೀನಿನ ಪೂರ್ಣ ವಿವರಗಳನ್ನು ಜ: 15 ರೊಳಗೆ ಪ್ರಕಟಿಸುವುದಾಗಿ ಜಿಲ್ಲಾಧಿಕಾರಿ ಬಿ. ಪಾರ್ಥಸಾರಥಿ ತಿಳಿಸಿದ್ದಾರೆ.

ಒಬ್ಬರಿಗೆ ಮಂಜೂರಾದ ಭೂಮಿಗೇ ಪುನಃ ಬೇರೊಬ್ಬರು ಅರ್ಜಿ ಹಾಕಿ ತೊಂದರೆ ಪಡುವುದನ್ನು ತಪ್ಪಿಸಲು ಈ ಕ್ರಮ ಕೈಗೊಳ್ಳುತ್ತಿದ್ದು, **ಮಂಜೂರಾತಿಯ ವಿಷಯದಲ್ಲಿ ಯಾರದ್ದಾದರೂ ಆಕ್ಷೇಪಗಳಿದ್ದಲ್ಲಿ ಜನವರಿ 31 ರೊಳಗೆ** ತಹಸೀಲ್ದಾರ್, **ಕಂದಾಯ ಉಪ ವಿಭಾಗಾಧಿಕಾರಿ** ಅಥವಾ ಜಿಲ್ಲಾಧಿಕಾರಿಗಳಿಗೆ ಆಕ್ಷೇಪಣಾ **ಅರ್ಜಿ ಸಲ್ಲಿಸಬಹುದು.**

ಆಕ್ಷೇಪಣೆಗಳನ್ನು ಭೂಮಿ ಪಡೆದವರ ಮತ್ತು ಆಕ್ಷೇಪಣೆ ಮಾಡಿರುವವರ ಸಮಕ್ಷಮವೇ ಇತ್ಯರ್ಥ ಪಡಿಸಲಾಗುವುದು.

# ಮಿಲ್ ದರ ಏರಿಕೆಗೆ ರೈತ ಸಂಘದ ವಿರೋಧ

(ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ಮಿಲ್ ಮಾಲೀಕರುಗಳು ಜ. 1 ರಿಂದ ಬತ್ತ ಅಕ್ಕಿ ಮಾಡಿಸುವ ದರವನ್ನು 6 ರೂ. ನಿಂದ 7 ರೂ ಗೆ ಏರಿಸಿರುವುದರಿಂದ ರೈತರು ಬಾಡಿಗೆ ಹಲ್ಲಿಂಗ್ ಎಂದು ಸ್ವಲ್ಪ ಭಾಗ ಬತ್ತವನ್ನೇ ಮಾರಿಕೊಳ್ಳಬೇಕಾಗಿದೆ. ಈ ಏರಿಕೆಯನ್ನು ಶೃಂಗೇರಿ ತಾ|| ರೈತ ಸಂಘ ತೀವ್ರವಾಗಿ ವಿರೋಧಿಸುತ್ತದೆ. ಈ ಬಗ್ಗೆ ಮಾತುಕತೆಗೆ ಬರುವಂತೆ ಮಿಲ್ ಮಾಲೀಕರುಗಳಿಗೆ ತಹಸೀಲ್ದಾರರಿಂದ ನೋಟೀಸು ಕೊಡಿಸಲಾಗಿದೆ. ಸಮರ್ಪಕವಾದ ಇತ್ಯರ್ಥ ಆಗದಿದ್ದರೆ ಚಳುವಳಿ ನಡೆಸಲಾಗುತ್ತದೆ ಎಂಬುದಾಗಿ ಶೃಂಗೇರಿ ತಾ|| ರೈತ ಸಂಘದ ಅಧ್ಯಕ್ಷ ಎ. ಎಂ. ಶ್ರೀಕಂಠಗೌಡ ತಿಳಿಸಿದ್ದಾರೆ.

[ಕಳೆದ ವರ್ಷ ಭತ್ತಕ್ಕೆ ಬೆಲೆಯಿಲ್ಲವಾಗಿ, ರೈತರು ತಿಳಿಯದೆ ಮಿಲ್‌ಗಳಲ್ಲಿ ಭತ್ತ ಇಟ್ಟು ಅನುಭವಿಸಿದ ಬವಣೆ ಎಂದೆಂದಿಗೂ ಮರೆಯಲಾರದ್ದು. ಅಗ ರೈತರ ನಿಜವಾದ ಬೇಡಿಕೆಗಳಿಗೆ ಹೋರಾಡದೆ ಸಾರಾಯಿ ಬೆಲೆ ಇಳಿಸಲು ಹೋರಾಡಿ ಸುಸ್ತಾಗಿ ನಿದ್ರಿಸಿದ ರೈತ ಸಂಘ ಈಗ ಎಚ್ಚೆತ್ತಿರುವುದು ಶ್ಲಾಘನೀಯ ಹಾಗೆಯೇ ಸರ್ಕಾರ ಕೊಟ್ಟ ಬೆಂಬಲ ಬೆಲೆ ಬೆಲೆ ರೈತರಿಗೆ ಸಕಾಲದಲ್ಲಿ ಸಿಗುವಂತೆಯೂ ರೈತ ಸಂಘವೇ ಮುಂದಾಳ್ತನ ವಹಿಸಿದರೆ ಕ್ಷೇಮ.]

# ಕೇಂದ್ರ ಸರ್ಕಾರದಿಂದ ಕ್ಯಾಪಿಟೇಶನ್ ಶುಲ್ಕ ರದ್ದತಿಗೆ ಕಾನೂನು?

ದೇಶದಲ್ಲಿನ ವೈದ್ಯಕೀಯ ಕಾಲೇಜುಗಳು ವಿದ್ಯಾರ್ಥಿಗಳಿಂದ ಕ್ಯಾಪಿಟೇಶನ್ ಶುಲ್ಕ ತೆಗೆದುಕೊಳ್ಳುವುದನ್ನು ತಡೆಗಟ್ಟಲು ಕೇಂದ್ರ ಸರ್ಕಾರವು ಅಗತ್ಯ ಬಿದ್ದಲ್ಲಿ ಹೊಸ ಕಾನೂನನ್ನು ಸಹ ಜಾರಿಗೆ ತರುವುದೆಂದು ಕೇಂದ್ರದ ಆರೋಗ್ಯಮಂತ್ರಿ ಮೊಹ್ಸಿನಾ ಕಿದ್ವಾಯಿ ಹೇಳಿದ್ದಾರೆ.

ನಾಯಿಕೊಡೆಗಳಂತೆ ದೇಶಾದ್ಯಂತ ಮೆಡಿಕಲ್ ಕಾಲೇಜುಗಳು ಹುಟ್ಟಿಕೊಳ್ಳುತ್ತಿರುವ ಬಗ್ಗೆ ಆತಂಕ ವ್ಯಕ್ತಪಡಿಸಿರುವ ಅವರು, ಉತ್ತಮ ಮಟ್ಟದ ವೈದ್ಯಕೀಯ ಶಿಕ್ಷಣ ಸಾಧ್ಯವಾಗಬೇಕಾದರೆ ಕಳಪೆ ವೈದ್ಯಕೀಯ ಕಾಲೇಜುಗಳು ಹೆಚ್ಚುವುದನ್ನು ತಡೆಗಟ್ಟಬೇಕು ಎಂದು ತಿಳಿಸಿದ್ದಾರೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್; ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.